# ಕರ್ನಾಟಕ ವಿಧಾನ ಪರಿಷತ್

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1294 |
| 2 | ಸದಸ್ಯರ ಹೆಸರು | : | ಶ್ರೀ ಅಮರನಾಥ ಪಾಟೀಲ್ (ಪದವೀಧರರ ಕ್ಷೇತ್ರ) |
| 3 | ಉತ್ತರಿಸಬೇಕಾದ ದಿನಾಂಕ | : | 27.02.2018 |
| 4 | ಉತ್ತರಿಸುವ ಸಚಿವರು | : | ಮಾನ್ಯ ತೋಟಗಾರಿಕೆ ಮತ್ತು ಕೃಷಿ ಮಾರುಕಟ್ಟೆ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ನೋಂದಾಯಿತ ರೈತರಿಂದ ತೊಗರಿ ಖರೀದಿ ಮಿತಿಯನ್ನು 20 ಕ್ವಿಂಟಾಲ್‌ದಿಂದ 10 ಕ್ವಿಂಟಾಲ್‌ಗೆ ಕಡಿತಗೊಳಿಸಲಾಗಿದೆಯೇ; ಕಾರಣಗಳೊಂದಿಗೆ ಮಾಹಿತಿ ನೀಡುವುದು; | ಕೇಂದ್ರ ಸರ್ಕಾರವು ತೊಗರಿ ಖರೀದಿಗೆ ಅನುಮತಿ ನೀಡಿರುವ ತೊಗರಿ ಪ್ರಮಾಣ 26,52,000 ಕ್ವಿಂಟಾಲ್‌ಗಳಲ್ಲಿ ದಿನಾಂಕ:23.02.2018ರ ಅಂತ್ಯಕ್ಕೆ 25,05,814.56 ಕ್ವಿಂಟಾಲ್ ಪ್ರಮಾಣವನ್ನು 1,90,960 ರೈತರಿಂದ ಖರೀದಿಸಲಾಗಿದ್ದು, ಇನ್ನೂ 1,24,522 ನೊಂದಾಯಿತ ರೈತರಿಂದ 1,46,185.44 ಕ್ವಿಂಟಾಲ್ ಖರೀದಿಸಲು ಬಾಕಿ ಉಳಿದಿರುತ್ತದೆ. ಬಾಕಿ ಉಳಿಯುವ ಪ್ರಮಾಣವನ್ನು ಪ್ರತಿ ರೈತರಿಂದ 10 ಕ್ವಿಂಟಾಲ್‌ನಂತೆ ಖರೀದಿಸಿದ್ದಲ್ಲಿ ಬಾಕಿ ಉಳಿದ 1,24,522 ನೋಂದಾಯಿತ ರೈತರ ಪೈಕಿ 14,618 ರೈತರಿಂದ ಮಾತ್ರ ಖರೀದಿಸಬಹುದಾಗಿದ್ದು, ಇನ್ನೂ 1,09,904 ನೋಂದಾಯಿತ ರೈತರು ಬಾಕಿ ಉಳಿಯುತ್ತಾರೆ.<br><br>ಕಾರಣ, ನೋಂದಾಯಿತ ತೊಗರಿ ರೈತರ ಹಿತ ಕಾಪಾಡುವ ದೃಷ್ಟಿಯಿಂದ ದಿನಾಂಕ:13.02.2018 ರಂದು ಹೊರಡಿಸಲಾದ ಸರ್ಕಾರಿ ಆದೇಶದಲ್ಲಿ ದಿನಾಂಕ:14.02.2018 ರಿಂದ ಜಾರಿಗೆ ಬರುವಂತೆ ಪ್ರತಿ ರೈತರಿಂದ 20 ಕ್ವಿಂಟಾಲ್ ಬದಲಾಗಿ 10 ಕ್ವಿಂಟಾಲ್ ತೊಗರಿ ಖರೀದಿಸಲು ಕ್ರಮ ವಹಿಸಲು ಆದೇಶಿಸಲಾಗಿರುತ್ತದೆ. |
| ಆ | ರೈತರು ತೊಗರಿ ಬೆಳೆದು ಮಾರಾಟವಾಗದೆ ಸಂಕಷ್ಟದಲ್ಲಿದ್ದು, ಸರ್ಕಾರ ರೈತರ ಸಹಾಯಕ್ಕೆ ಬಂದು ಪ್ರತಿ ರೈತರಿಂದ 20 ಕ್ವಿಂಟಾಲ್ ಖರೀದಿ ಮಾಡಲು ಮುಂದಾಗುವುದೇ; ಬಾಕಿ ಇರುವ ರೈತರ ತೊಗರಿ ಪ್ರಮಾಣದ ಜಿಲ್ಲಾವಾರು ಮಾಹಿತಿ ನೀಡುವುದು? | ರಾಜ್ಯ ಸರ್ಕಾರದಿಂದ ಕೇಂದ್ರ ಸರ್ಕಾರಕ್ಕೆ ಖರೀದಿ ಪ್ರಮಾಣವನ್ನು 5.00 ಲಕ್ಷ ಮೆ.ಟನ್‌ಗೆ ಹೆಚ್ಚಿಸಲು ಕೋರಿರುವ ಪ್ರಸ್ತಾವನೆಗೆ ಕೇಂದ್ರ ಸರ್ಕಾರದಿಂದ ಅನುಮೋದನೆ ದೊರೆತ ನಂತರ ಪ್ರತಿ ರೈತರಿಂದ 20 ಕ್ವಿಂಟಾಲ್ ತೊಗರಿ ಖರೀದಿ ಮಾಡುವ ಬಗ್ಗೆ ಸರ್ಕಾರದಿಂದ ಪರಿಶೀಲಿಸಲಾಗುವುದು. ಬಾಕಿ ಇರುವ ರೈತರ ತೊಗರಿ ಪ್ರಮಾಣದ ಜಿಲ್ಲಾವಾರು ಮಾಹಿತಿ ಈ ಕೆಳಕಂಡಂತಿರುತ್ತದೆ. |

| ಕ್ರ ಸಂ | ಜಿಲ್ಲೆಯ ಹೆಸರು | ತೊಗರಿ ಖರೀದಿಸಲು ಬಾಕಿ ಇರುವ ರೈತರ ಸಂಖ್ಯೆ |
|---|---|---|
| 1 | ಬಾಗಲಕೋಟೆ | 5336 |

| | | | |
|---|---|---|---|
| | 2 | ಬೆಳಗಾವಿ | 1137 |
| | 3 | ಬಳ್ಳಾರಿ | 6 |
| | 4 | ಬೀದರ್ | 8961 |
| | 5 | ಕಲಬುರಗಿ+ ಕಲಬುರಗಿ ತೊಗರಿ ಮಂಡಳಿ | 62704 |
| | 6 | ಕೊಪ್ಪಳ | 339 |
| | 7 | ರಾಯಚೂರು | 4466 |
| | 8 | ವಿಜಯಪುರ | 38896 |
| | 9 | ಯಾದಗಿರಿ+ ಯಾದಗಿರಿ ತೊಗರಿ ಮಂಡಳಿ | 2677 |
| | | **ಒಟ್ಟು** | **124522** |

ಸಂಖ್ಯೆ: ಸಇ 89 ಎಂಆರ್ಇ 2018

(ಎಸ್.ಎಸ್. ಮಲ್ಲಿಕಾರ್ಜುನ್)
ತೋಟಗಾರಿಕೆ ಮತ್ತು ಕೃಷಿ ಮಾರುಕಟ್ಟೆ ಸಚಿವರು